RNI No. **KARBIL/2001/47147**

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೮<br>Volume 148 | ಬೆಂಗಳೂರು, ಗುರುವಾರ, ಜುಲೈ ೨೫, ೨೦೧೩ (ಶ್ರಾವಣ ೩, ಶಕ ವರ್ಷ ೧೯೩೫)<br>Bangalore, Thursday, July 25, 2013 (Shravana 3, Shaka Varsha 1935) | ಸಂಚಿಕೆ ೩೦<br>Issue 30 |
|---|---|---|

## ಭಾಗ ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

### ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ರಾಮನಗರ

**ನೇಮಕಾತಿ ಪ್ರಕಟಣೆ**

**ಅಧಿಸೂಚನೆ ಸಂಖ್ಯೆ: ಎಡಿಎಂ. 28/2013, ದಿನಾಂಕ: 08.07.2013.**

**ವಿಷಯ :** ಶೀಘ್ರಲಿಪಿಗಾರರು ಮತ್ತು ಬೆರಳಚ್ಚುಗಾರರ ಹುದ್ದೆಗೆ ಅಭ್ಯರ್ಥಿಗಳನ್ನು ಆಯ್ಕೆ ಮಾಡುವ ಬಗ್ಗೆ.

**ಉಲ್ಲೇಖ :** 1. ಈ ಕಚೇರಿ ಅಧಿಸೂಚನೆ ಸಂಖ್ಯೆ ಆಡಳಿತ 25/12, ದಿನಾಂಕ 05.10.2012ರ ಅನ್ವಯ ಉಳಿದಿರುವ ಬೆರಳಚ್ಚುಗಾರರ (ಬ್ಯಾಕ್‌ಲಾಗ್) ಹುದ್ದೆಗಳನ್ನು ಭರ್ತಿ ಮಾಡಿಕೊಳ್ಳಲು.

2. ಈ ಕಚೇರಿ ಅಧಿಸೂಚನೆ ಸಂಖ್ಯೆ ಆಡಳಿತ 12/2013, ದಿನಾಂಕ 20.02.2013ರ ಅನ್ವಯ ಉಳಿದಿರುವ ಶೀಘ್ರಲಿಪಿಗಾರರ (ಬ್ಯಾಕ್‌ಲಾಗ್) ಹುದ್ದೆಗಳನ್ನು ಭರ್ತಿ ಮಾಡಿಕೊಳ್ಳಲು.

ಮೇಲ್ಕಂಡ ಅಧಿಸೂಚನೆಯನ್ವಯ ರಾಮನಗರ ಜಿಲ್ಲಾ ನ್ಯಾಯಾಲಯ ಘಟಕದ ಅಧೀನ ನ್ಯಾಯಾಲಯಗಳಲ್ಲಿ ಖಾಲಿ ಇರುವ ಶೀಘ್ರಲಿಪಿಗಾರರು ಮತ್ತು ಬೆರಳಚ್ಚುಗಾರರ ಹುದ್ದೆಗಳಿಗೆ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಿದೆ. ನಿಗದಿ ಪಡಿಸಿದ ಅರ್ಜಿ ನಮೂನೆಯಲ್ಲಿ ಅಭ್ಯರ್ಥಿಗಳು ತಮ್ಮ ಸ್ವಂತ ಕೈಬರಹದಿಂದ ಎಲ್ಲಾ ಅಂಕಣಗಳನ್ನು ಜಾಗರೂಕತೆಯಿಂದ ಭರ್ತಿ ಮಾಡಿ **ದಿನಾಂಕ 07.08.2013ರ ಬುಧವಾರ ಸಂಜೆ 4.00 ಗಂಟೆಯ ಒಳಗೆ ಸಲ್ಲಿಸತಕ್ಕದ್ದು.**

**ಅರ್ಜಿಗಳನ್ನು ಸಲ್ಲಿಸಲು ನಿಗದಿ ಮಾಡಿದ ಕೊನೆಯ ದಿನಾಂಕ 07.08.2013 ರ ಬುಧವಾರ ಸಂಜೆ 4.00 ಗಂಟೆಯವರೆಗೆ**

**ಖಾಲಿ ಇರುವ ಹುದ್ದೆಗಳ ವರ್ಗೀಕರಣ**

**I. ಶೀಘ್ರಲಿಪಿಗಾರರ ಹುದ್ದೆ**

1. ಹುದ್ದೆಗಳ ಸಂಖ್ಯೆ : 09
2. ವೇತನ ಶ್ರೇಣಿ – 14550–350–15600–400–17200–450–19000–500–21000–600–24600–700–26700

   ಹಾಗೂ ಲಭ್ಯವಿರುವ ಇತರೆ ಭತ್ಯೆಗಳು

3. ಹುದ್ದೆಗಳ ವರ್ಗೀಕರಣ:

| ವರ್ಗೀಕರಣ | ಇತರೆ | ಮಹಿಳಾ | ಗ್ರಾಮೀಣ | ಕನ್ನಡ ಮಾಧ್ಯಮ | ಯೋಜನಾ ನಿರಾಶ್ರಿತರು | ಮಾಜಿ ಸೈನಿಕ | ಒಟ್ಟು |
|---|---|---|---|---|---|---|---|
| ಸಾಮಾನ್ಯ (ಬ್ಯಾಕ್ ಲಾಗ್) | – | 1 | 1 | – | – | – | 2 |
| ಪರಿಶಿಷ್ಟ ಪಂಗಡ (ಬ್ಯಾಕ್ ಲಾಗ್) * | 1 | – | – | – | – | – | 1 |
| ಪ್ರವರ್ಗ I (ಬ್ಯಾಕ್ ಲಾಗ್) | 1 | – | – | – | – | – | 1 |
| ಪ್ರವರ್ಗ II (ಎ) (ಬ್ಯಾಕ್ ಲಾಗ್) | 1 | 1 | – | – | – | – | 2 |
| ಪ್ರವರ್ಗ II –(ಬಿ) (ಬ್ಯಾಕ್ ಲಾಗ್) | 1 | – | – | – | – | – | 1 |
| ಪ್ರವರ್ಗ III (ಎ) (ಬ್ಯಾಕ್ ಲಾಗ್) | 1 | – | – | – | – | – | 1 |
| ಪ್ರವರ್ಗ III (ಬಿ) (ಬ್ಯಾಕ್ ಲಾಗ್) | 1 | – | – | – | – | – | 1 |
| **ಒಟ್ಟು** | **6** | **2** | **1** | – | – | – | **9** |

- ಸೂಚನೆ : ಸೂಕ್ತ ಪರಿಶಿಷ್ಟ ಪಂಗಡದ ಅಭ್ಯರ್ಥಿಗಳು ಲಭ್ಯವಿಲ್ಲದಿದ್ದಲ್ಲಿ ಪರಿಶಿಷ್ಟ ಜಾತಿಯ ಅಭ್ಯರ್ಥಿಗಳಿಂದ ತುಂಬಲಾಗುವುದು.

**4. ಶೈಕ್ಷಣಿಕ ವಿದ್ಯಾರ್ಹತೆ**

ಎ) ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯು ನಡೆಸುವ ಎಸ್.ಎಸ್.ಎಲ್.ಸಿ ಪರೀಕ್ಷೆಯಲ್ಲಿ ಉತ್ತೀರ್ಣತೆ ಅಥವಾ ತತ್ಸಮಾನ ವಿದ್ಯಾರ್ಹತೆ.

ಬಿ) ಕರ್ನಾಟಕ ಪ್ರೌಢ ಶಿಕ್ಷಣ ಮಂಡಳಿಯು ನಡೆಸುವ ಹಿರಿಯ ದರ್ಜೆಯ (Senior Grade) ಕನ್ನಡ ಮತ್ತು ಆಂಗ್ಲ ಭಾಷೆಗಳ ಬೆರಳಚ್ಚು ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರಬೇಕು ಅಥವಾ ತತ್ಸಮಾನ ವಿದ್ಯಾರ್ಹತೆ.

ಸಿ) ಕರ್ನಾಟಕ ಪ್ರೌಢ ಶಿಕ್ಷಣ ಮಂಡಳಿಯು ನಡೆಸುವ ಹಿರಿಯ ( Senior Grade) ದರ್ಜೆಯ ಕನ್ನಡ ಮತ್ತು ಆಂಗ್ಲ ಭಾಷೆಗಳ ಶೀಘ್ರಲಿಪಿ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರಬೇಕು ಅಥವಾ ತತ್ಸಮಾನ ವಿದ್ಯಾರ್ಹತೆ ಅಥವಾ ಡಿಪ್ಲೋಮೊ ಇನ್ ಸೆಕ್ರೆಟೇರಿಯಲ್/ ಕಮರ್ಷಿಯಲ್ ಪ್ರಾಕ್ಟೀಸ್‌ನಲ್ಲಿ ಕನ್ನಡ ಮತ್ತು ಆಂಗ್ಲ ಭಾಷೆಗಳ ಹಿರಿಯ ದರ್ಜೆ ಶೀಘ್ರಲಿಪಿ ಮತ್ತು ಬೆರಳಚ್ಚು ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರಬೇಕು.

**II. ಬೆರಳಚ್ಚುಗಾರರ ಹುದ್ದೆ**

1. ಹುದ್ದೆಗಳ ಸಂಖ್ಯೆ : 04

2. ವೇತನ ಶ್ರೇಣಿ – 11600–200–12000–250–13000–300–14200–350–15600–400–17200–450–19000–500–21000 ಹಾಗೂ ಲಭ್ಯವಿರುವ ಇತರೆ ಭತ್ಯೆಗಳು.

3. ಹುದ್ದೆಗಳ ವರ್ಗೀಕರಣ:

| ವರ್ಗೀಕರಣ | ಇತರೆ | ಮಹಿಳಾ | ಕನ್ನಡ ಮಾಧ್ಯಮ | ಒಟ್ಟು |
|---|---|---|---|---|
| ಸಾಮಾನ್ಯ (ಬ್ಯಾಕ್ ಲಾಗ್) | – | – | 1 | 1 |
| ಪ್ರವರ್ಗ I (ಬ್ಯಾಕ್ ಲಾಗ್) | – | 1 | – | 1 |
| ಪ್ರವರ್ಗ II (ಎ) (ಬ್ಯಾಕ್ ಲಾಗ್) | – | 1 | – | 1 |
| ಪ್ರವರ್ಗ III (ಬಿ)(ಬ್ಯಾಕ್ ಲಾಗ್) | 1 | – | – | 1 |
| **ಒಟ್ಟು** | **1** | **2** | **1** | **4** |

**4. ಶೈಕ್ಷಣಿಕ ವಿದ್ಯಾರ್ಹತೆ :**

ಎ) ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯು ನಡೆಸುವ ಎಸ್.ಎಸ್.ಎಲ್.ಸಿ ಪರೀಕ್ಷೆಯಲ್ಲಿ ಉತ್ತೀರ್ಣತೆ ಅಥವಾ ತತ್ಸಮಾನ ವಿದ್ಯಾರ್ಹತೆ.

ಬಿ) ಕರ್ನಾಟಕ ಪ್ರೌಢ ಶಿಕ್ಷಣ ಮಂಡಳಿಯು ನಡೆಸುವ ಹಿರಿಯ ದರ್ಜೆಯ (Senior Grade) ಕನ್ನಡ ಮತ್ತು ಆಂಗ್ಲ ಭಾಷೆಗಳ ಬೆರಳಚ್ಚು ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರಬೇಕು ಅಥವಾ ತತ್ಸಮಾನ ವಿದ್ಯಾರ್ಹತೆ.

**ವಯೋಮಿತಿ**

| | | | |
|---|---|---|---|
| ಕನಿಷ್ಠ ವಯೋಮಿತಿ : | 18 ವರ್ಷ | | |
| ಗರಿಷ್ಠ ವಯೋಮಿತಿ : | ಸಾಮಾನ್ಯ ವರ್ಗ | – | 35 ವರ್ಷ |
| | 2ಎ, 2ಬಿ, 3ಎ, 3ಬಿ | – | 38 ವರ್ಷ |
| | ಪ.ಜಾ, ಪ.ಪಂ, ಪ್ರವರ್ಗ 1 | – | 40 ವರ್ಷ |

ವಿಧವೆಯರಿಗೆ, ಮಾಜಿ ಸೈನಿಕರಿಗೆ, ಅಂಗವಿಕಲರಿಗೆ ಹಾಗೂ ಸರ್ಕಾರಿ ಸೇವೆಯಲ್ಲಿರುವವರಿಗೆ ನಿಯಮಾನುಸಾರ ವಯೋಮಿತಿಯಲ್ಲಿ ಸಡಿಲಿಕೆ ನೀಡಲಾಗುವುದು.

**ಆಯ್ಕೆ ವಿಧಾನ :**

ಕರ್ನಾಟಕ ಅಧೀನ ನ್ಯಾಯಾಲಯಗಳು (ಮಿನಿಸ್ಟೀರಿಯಲ್ ಮತ್ತು ಇತರೆ ಹುದ್ದೆಗಳು) (ನೇಮಕಾತಿ) (ತಿದ್ದುಪಡಿ) ನಿಯಮಗಳು 2007ರ ಅನ್ವಯ ನೇರ ನೇಮಕಾತಿಯ ಮೂಲಕ ಆಯ್ಕೆ ಮಾಡಲಾಗುವುದು.

I. ಶೀಘ್ರಲಿಪಿಗಾರರ ಹುದ್ದೆಗೆ ಈ ಕೆಳಕಂಡ ಅರ್ಹತಾ ಪರೀಕ್ಷೆಯನ್ನು ನಡೆಸಲಾಗುವುದು.

ಅ) ಒಂದು ನಿಮಿಷಕ್ಕೆ 120 ಶಬ್ಧಗಳಂತೆ 5 ನಿಮಿಷಗಳ ಅವಧಿಯ ಉಕ್ತಲೇಖನ ಮತ್ತು ಅದನ್ನು ಲಿಪ್ಯಂತರ ಮಾಡಲು 45 ನಿಮಿಷಗಳ ಅವಧಿ. (ಗರಿಷ್ಠ 100 ಅಂಕಗಳ ಪರೀಕ್ಷೆಯಲ್ಲಿ ಕನಿಷ್ಠ 50 ಅಂಕಗಳನ್ನು ಪಡೆಯಬೇಕಾಗಿರುತ್ತದೆ).

ಆ) ಶೀಘ್ರಲಿಪಿಗಾರರ ಹುದ್ದೆಗೆ ಅವರು ಪಡೆದಿರುವ ಶೈಕ್ಷಣಿಕ ವಿದ್ಯಾರ್ಹತೆಯ ಅಂಕಗಳು ಮತ್ತು ಅರ್ಹತಾ ಪರೀಕ್ಷೆಯ ಗರಿಷ್ಠ ಅಂಕಗಳ ಆಧಾರದ ಮೇಲೆ ಒಂದು ಹುದ್ದೆಗೆ ಐದು ಅಭ್ಯರ್ಥಿಗಳನ್ನು ಸಂದರ್ಶನಕ್ಕೆ ಕರೆಯಲಾಗುವುದು.

**II. ಬೆರಳಚ್ಚುಗಾರರ ಹುದ್ದೆಗೆ :**

ಅ) 15 ನಿಮಿಷಗಳ ಉಕ್ತಲೇಖನವನ್ನು ಬೆರಳಚ್ಚುಪಡಿಸುವ ಅರ್ಹತಾ ಪರೀಕ್ಷೆಯನ್ನು ನಡೆಸಲಾಗುವುದು (ಗರಿಷ್ಠ 100 ಅಂಕಗಳ ಪರೀಕ್ಷೆಯಲ್ಲಿ ಕನಿಷ್ಠ 50 ಅಂಕಗಳನ್ನು ಪಡೆಯಬೇಕಾಗಿರುತ್ತದೆ).

ಆ) ಸಂದರ್ಶನ

ಇ) ಶೀಘ್ರಲಿಪಿಗಾರರ/ಬೆರಳಚ್ಚುಗಾರ ಹುದ್ದೆಗಳಿಗೆ 1:5 ರ ಅನುಪಾತದಲ್ಲಿ, ನಿಗಧಿಪಡಿಸಿದ ವಿದ್ಯಾರ್ಹತೆಗೆ ಮತ್ತು ಅರ್ಹತಾ ಪರೀಕ್ಷೆಯಲ್ಲಿ ಪಡೆದ ಅಂಕಗಳಿಗೆ ಅನುಗುಣವಾಗಿ, ಅತೀ ಹೆಚ್ಚು ಅಂಕ ಪಡೆದ ಅಭ್ಯರ್ಥಿಗಳನ್ನು ಸಂದರ್ಶನಕ್ಕೆ ಆಯ್ಕೆ ಮಾಡಲಾಗುವುದು, ಅಭ್ಯರ್ಥಿಗಳು ತಮ್ಮ ಸ್ವಂತ ಖರ್ಚಿನಲ್ಲಿ ಸಂದರ್ಶನಕ್ಕೆ ಹಾಜರಾಗುವುದು.

**ಪ್ರಮುಖವಾದ ಸೂಚನೆಗಳು**

ಅಭ್ಯರ್ಥಿಗಳು ಕೆಳಕಂಡ ಪ್ರಮಾಣ ಪತ್ರಗಳ ಒಂದೊಂದು ಛಾಯಾ ಪ್ರತಿ (ಫೋಟೋ ಕಾಪಿ/ಜೆರಾಕ್ಸ್) ಗಳನ್ನು ಸ್ವಯಂ–ದೃಢೀಕರಿಸಿ ಅರ್ಜಿಯೊಂದಿಗೆ ಲಗತ್ತಿಸಬೇಕು. ಅರ್ಜಿಯೊಂದಿಗೆ ಮೂಲ ಪ್ರತಿ (ಒರಿಜಿನಲ್) ಗಳನ್ನು ಲಗತ್ತಿಸುವ ಅವಶ್ಯಕತೆ ಇರುವುದಿಲ್ಲ.

1. ಹುದ್ದೆಗೆ ನಿಗದಿಪಡಿಸಲಾದ ವಿದ್ಯಾರ್ಹತೆಯ ಎಲ್ಲಾ ವರ್ಷಗಳ ಅಂಕಪಟ್ಟಿಗಳು ಹಾಗೂ ಪ್ರಮಾಣ ಪತ್ರಗಳು.
2. ಜನ್ಮ ದಿನಾಂಕವನ್ನು ನಮೂದಿಸಿರುವ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರ, ವರ್ಗಾವಣೆ ಪ್ರಮಾಣ ಪತ್ರ, ಜನನ ದಿನಾಂಕವನ್ನು ತೋರಿಸುವ ಸಂಚಿತ ದಾಖಲೆಯ ಉದೃತ ಭಾಗ.
3. ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರ ನಮೂನೆ – 1 ಮತ್ತು 2 ರಲ್ಲಿ (ಮೀಸಲಾತಿ ಕೋರಿದ್ದಲ್ಲಿ)
4. ಅಭ್ಯರ್ಥಿಯು ಕೊನೆಯಲ್ಲಿ ವಿದ್ಯಾಭ್ಯಾಸ ಮಾಡಿದ ಶಾಲಾ, ಕಾಲೇಜಿನ ಮುಖ್ಯೋಪಾಧ್ಯಾಯರು, ಪ್ರಾಂಶುಪಾಲರಿಂದ ಪಡೆದ ಒಂದು ನಡತೆ ಪ್ರಮಾಣ ಪತ್ರ.
5. ಅಭ್ಯರ್ಥಿಯು ನಡತೆಯನ್ನು ದೃಢೀಕರಿಸುವ ಬಗ್ಗೆ ಅವನು ಓದಿರುವ ವಿದ್ಯಾಸಂಸ್ಥೆಗಳಿಗೆ ಸಂಬಂಧಪಡದ ಹಾಗೂ ಅಭ್ಯರ್ಥಿಯ ಸಂಬಂಧಿಗಳಲ್ಲದ ಇಬ್ಬರು ಸ್ಥಳೀಯ ಗಣ್ಯವ್ಯಕ್ತಿಗಳಿಂದ ಪಡೆದ 6 ತಿಂಗಳ ಈಚೆಗಿನ ಎರಡು ನಡತೆ ಪ್ರಮಾಣ ಪತ್ರಗಳು.

**ಇತರೆ ಸೂಚನೆಗಳು :**

1. ಸೇವೆಯಲ್ಲಿರುವ ಅಭ್ಯರ್ಥಿಗಳು ಅರ್ಜಿಯೊಂದಿಗೆ ತಮ್ಮ ಮೇಲಾಧಿಕಾರಿಗಳಿಂದ ಪಡೆದ ದೃಢೀಕರಣ ಹಾಗೂ ಅನುಮತಿ ಪ್ರಮಾಣ ಪತ್ರವನ್ನು ನೀಡತಕ್ಕದ್ದು.
2. ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕವು ಸಾರ್ವತ್ರಿಕ ರಜಾ ದಿನವಾಗಿ ಘೋಷಿಸಲ್ಪಟ್ಟರೆ ಆ ದಿನಾಂಕದ ಮಾರನೆಯ ಕೆಲಸದ ದಿನವು ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕವಾಗುವುದು.
3. ಅರ್ಜಿಯೊಂದಿಗೆ 6 ರೂಪಾಯಿಯ ಅಂಚೆ ಮುದ್ರಾಂಕ (Postal Stamp) ವನ್ನು ಹೊಂದಿರುವ ಸ್ವ-ವಿಳಾಸದ ಲಕೋಟೆಯನ್ನು ಸಲ್ಲಿಸತಕ್ಕದ್ದು.
4. ಅರ್ಜಿಯೊಂದಿಗೆ ಅಭ್ಯರ್ಥಿಗಳು ತಮ್ಮ ಇತ್ತೀಚಿನ ಒಂದು ಭಾವಚಿತ್ರವನ್ನು ಸ್ವ-ದೃಢೀಕರಿಸಿ ಲಗತ್ತಿಸಬೇಕು.
5. ಸಂದರ್ಶನಕ್ಕೆ ಆಯ್ಕೆಯಾದ ಅಭ್ಯರ್ಥಿಗಳು ತಮ್ಮ ಸ್ವಂತ ಖರ್ಚಿನಲ್ಲಿಯೇ ಸಂದರ್ಶನಕ್ಕೆ ಹಾಜರಾಗಬೇಕು ಹಾಗೂ ಸಂದರ್ಶನ ಪತ್ರ ಬಾರದಿರುವ ಅಭ್ಯರ್ಥಿಗಳು ಸಂದರ್ಶನಕ್ಕೆ ಅರ್ಹರಲ್ಲವೆಂದು ಭಾವಿಸಿಕೊಳ್ಳತಕ್ಕದ್ದು.
6. ಆಯ್ಕೆಯ ಸಂಬಂಧವಾಗಿ ಸಂದರ್ಶನಕ್ಕೆ ಅನರ್ಹರಾದ ಅಭ್ಯರ್ಥಿಗಳು ಈ ಕಛೇರಿಯೊಂದಿಗೆ ಯಾವುದೇ ಪತ್ರ ವ್ಯವಹಾರವನ್ನು ನಡೆಸಲು ಆಸ್ಪದವಿರುವುದಿಲ್ಲ.

**ವಿಶೇಷ ಸೂಚನೆ**

1. ಮೇಲ್ಕಂಡ ಹುದ್ದೆಗಳಿಗೆ ಅರ್ಜಿಗಳನ್ನು ರಾಮನಗರ ಜಿಲ್ಲಾ ನ್ಯಾಯಾಲಯದ ಕಛೇರಿಯಲ್ಲಿ ವಿತರಿಸಲಾಗುತ್ತದೆ.
2. ಅರ್ಜಿಗಳನ್ನು ಪಡೆಯ ಬಯಸುವ ಅಭ್ಯರ್ಥಿಯು ಕ್ರಾಸ್ ಮಾಡಿದ 10 ರೂ.ಗಳ ಭಾರತೀಯ ಪೋಸ್ಟಲ್ ಆರ್ಡರ್ ಅಥವಾ ಬ್ಯಾಂಕ್ ಡಿ.ಡಿ.ಯನ್ನು **ಪ್ರಧಾನ ಜಿಲ್ಲಾ ನ್ಯಾಯಾಧೀಶರು, ರಾಮನಗರ** ರವರ ಹೆಸರಿಗೆ ಪಡೆದು ರಾಮನಗರ ಜಿಲ್ಲಾ ನ್ಯಾಯಾಲಯದ ಕಛೇರಿಗೆ ಸಲ್ಲಿಸಿ ಪಡೆಯಬಹುದು. ಪೋಸ್ಟಲ್ ಆರ್ಡರ್ ಅಥವಾ ಬ್ಯಾಂಕ್ ಡಿ.ಡಿ.ಯನ್ನು ಈ ನೇಮಕಾತಿ ಪ್ರಕಟಣಾ ದಿನದಿಂದ 15 ದಿವಸಗಳಿಗಿಂತ ಮುಂಚಿತವಾಗಿ ಪಡೆದಿರಬಾರದು. ಅಂಚೆ ಮೂಲಕ ಅರ್ಜಿ ಪಡೆಯಬಯಸುವ ಅಭ್ಯರ್ಥಿಗಳು 30 ರೂ. ಅಂಚೆ ಚೀಟಿ ಅಂಟಿಸಿದ ಸ್ವ-ವಿಳಾಸ ಬರೆದ ಲಕೋಟೆಯನ್ನು ಮತ್ತು 10 ರೂ. ಪೋಸ್ಟಲ್ ಆರ್ಡರ್ ಅಥವಾ ಬ್ಯಾಂಕ್ ಡಿ.ಡಿ.ಯ ಸಮೇತ ಕಳುಹಿಸಿದ್ದಲ್ಲಿ ಅರ್ಜಿಯನ್ನು ಕಳುಹಿಸಲಾಗುವುದು.
3. ಭರ್ತಿ ಮಾಡಿದ ಅರ್ಜಿಯ ಜೊತೆಗೆ ರೂ.50 (ಎಸ್.ಸಿ/ಎಸ್.ಟಿ ಮತ್ತು ಪ್ರವರ್ಗ-1ಕ್ಕೆ ರೂ.30) ಪೋಸ್ಟಲ್ ಆರ್ಡರ್ ಅಥವಾ ಬ್ಯಾಂಕ್ ಡಿ.ಡಿ.ಯನ್ನು **ಪ್ರಧಾನ ಜಿಲ್ಲಾ ನ್ಯಾಯಾಧೀಶರು, ರಾಮನಗರ** ರವರ ಹೆಸರಿನಲ್ಲಿ ಪಡೆದು ಪ್ರೊಸೆಸಿಂಗ್ ಶುಲ್ಕವಾಗಿ ಲಗತ್ತಿಸಿ **ದಿನಾಂಕ: 07.08.2013ರ ಬುಧವಾರ ಸಂಜೆ 4.00 ಗಂಟೆಯೊಳಗೆ** ಪ್ರಧಾನ ಜಿಲ್ಲಾ ನ್ಯಾಯಾಧೀಶರು, ಜಿಲ್ಲಾ ನ್ಯಾಯಾಲಯ, ರಾಮನಗರ ರವರಿಗೆ ಸಲ್ಲಿಸತಕ್ಕದ್ದು.
4. ಕೊನೆಯ ದಿನಾಂಕದ ನಂತರ ಸಲ್ಲಿಸಲಾದ ಯಾವುದೇ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

ನಿಗದಿತ ಅರ್ಜಿ ನಮೂನೆಯಲ್ಲಿ ಎಲ್ಲಾ ಅಂಕಣಗಳನ್ನು ಅಭ್ಯರ್ಥಿಗಳು ತಮ್ಮ ಬರಹದಿಂದಲೇ ಭರ್ತಿ ಮಾಡಿರತಕ್ಕದ್ದು. ಸರಿಯಾಗಿ ಅಂಕಣಗಳನ್ನು ಭರ್ತಿ ಮಾಡದೇ ಇರುವ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

**ಎಂ.ಕೆ. ಪ್ರಹ್ಲಾದ,**
ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು,
ರಾಮನಗರ.

**P.R. 83**
**S.C. 10**

## ನಿರ್ದೇಶಕರು ಹಾಗೂ ನೇಮಕಾತಿ ಪ್ರಾಧಿಕಾರ, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ, ವಿಕಾಸಸೌಧ, ಬೆಂಗಳೂರು

### ನೇಮಕಾತಿ ಪ್ರಕಟಣೆ

**ಅಧಿಸೂಚನೆ ಸಂಖ್ಯೆ: ಎಆರ್ಎಸ್ 17 ಇಎಸ್‌ಟಿ 2012 (ಭಾ), ದಿನಾಂಕ 27-06-2013.**

ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ, ಬೆಂಗಳೂರು ಇಲ್ಲಿ ಖಾಲಿ ಇರುವ ಗ್ರೂಪ್-ಸಿ ವೃಂದಕ್ಕೆ ಸೇರಿದ ಪರಿಶಿಷ್ಠ ಪಂಗಡದ ಈ ಕೆಳಕಂಡ ಒಂದು ಬ್ಯಾಕ್‌ಲಾಗ್ ಹುದ್ದೆಯನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡಲು ನಿಗದಿಪಡಿಸಿದ ಅರ್ಜಿ ನಮೂನೆಯಲ್ಲಿ ಅರ್ಹ ಅಭ್ಯರ್ಥಿಗಳಿಂದ ದ್ವಿಪ್ರತಿಗಳಲ್ಲಿ ಅರ್ಜಿ ಆಹ್ವಾನಿಸಲಾಗಿದೆ. ಈ ನೇಮಕಾತಿಯನ್ನು ಸರ್ಕಾರದ ಸುತ್ತೋಲೆ ಸಂಖ್ಯೆ : ಸಿಆಸುಇ 11 ಸೇಪಿಮ 2001, ದಿನಾಂಕ 18-5-2001 ಮತ್ತು ಸರ್ಕಾರದ ಅಧಿಸೂಚನೆ ಸಂಖ್ಯೆ ಸಿಆಸುಇ 13 ಎಸ್‌ಬಿಸಿ 2001 ದಿನಾಂಕ 21-11-2001ರನ್ವಯ ಹಾಗೂ ಕರ್ನಾಟಕ ಲೋಕಸೇವಾ ಆಯೋಗದ ಸೂಚನೆಯನ್ವಯ ನೇರ ನೇಮಕಾತಿ ಮಾಡಲಾಗುವುದು.

ಹುದ್ದೆಯ ವೇತನ ಶ್ರೇಣಿ ರೂ. 17650–450–19000–500–21000–600–24600–700–28800–800–32000.

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳನ್ವಯ ನಿಗದಿಪಡಿಸಿರುವ ವಿದ್ಯಾರ್ಹತೆ | ಬ್ಯಾಕ್‌ಲಾಗ್ ಹುದ್ದೆ ಪರಿಶಿಷ್ಟ ಪಂಗಡ |
|---|---|---|---|
| 1. | ತಾಂತ್ರಿಕ ಸಹಾಯಕರು | **ನೇರ ನೇಮಕಾತಿ :**<br>ಫೋಟೋಗ್ರಫಿ ಅಥವಾ ಸಮಾನ ವಿದ್ಯಾರ್ಹತೆಯೊಂದಿಗೆ ಡಿಪ್ಲೊಮಾ ಇನ್ ಸಿನಿಮಾಟೋಗ್ರಫೀ, ಎರಡು ವರ್ಷ ಕಡಿಮೆ ಇಲ್ಲದ ಫೋಟೋಗ್ರಫಿಯಲ್ಲಿ ಮೈಕ್ರೋಫಿಲಂನೊಂದಿಗೆ ಪ್ರಾಯೋಗಿಕ ಅನುಭವ ಹೊಂದಿರಬೇಕು.<br>**ಆದ್ಯತೆಯ ಅಗತ್ಯತೆ :**<br>ಭಾರತದಲ್ಲಿ ಕಾನೂನು ರೀತ್ಯ ಸ್ಥಾಪಿತವಾದ ವಿಶ್ವವಿದ್ಯಾನಿಲಯದಿಂದ ಭೌತಶಾಸ್ತ್ರ ಅಥವಾ ರಸಾಯನ ಶಾಸ್ತ್ರ ಮುಖ್ಯ ವಿಷಯದೊಂದಿಗೆ ವಿಜ್ಞಾನ ಪದವಿ ಪಡೆದಿರತಕ್ಕದ್ದು. ಗಣಕ ಯಂತ್ರದ ತಿಳುವಳಿಕೆ ಕಡ್ಡಾಯ.<br>**ವಯಸ್ಸು :** 40 ವರ್ಷ ವಯಸ್ಸು ಮೀರಿರಬಾರದು. | ಪರಿಶಿಷ್ಟ ಪಂಗಡ<br>1 ಹುದ್ದೆ |

1. ಅರ್ಜಿಯನ್ನು ಈ ಕೆಳಕಂಡ ನಮೂನೆಯಲ್ಲಿ ಬೆರಳಚ್ಚು ಮಾಡಿಸಿ ಅಡಕಗಳೊಂದಿಗೆ ದಿನಾಂಕ 25–7–2013 ರಂದು ಮಧ್ಯಾಹ್ನ 5.00 ಗಂಟೆಯೊಳಗಾಗಿ ಅಥವಾ ಅದಕ್ಕಿಂತ ಮುಂಚಿತವಾಗಿ ತಲುಪುವಂತೆ ಕಳುಹಿಸಬೇಕು. ನಂತರ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

2. ಭರ್ತಿ ಮಾಡಿದ ಅರ್ಜಿಗಳನ್ನು ಅಡಕಗಳೊಂದಿಗೆ ಸಲ್ಲಿಸಬೇಕಾದ ವಿಳಾಸ :

   **ನಿರ್ದೇಶಕರು,**
   **ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ,**
   **ಕೊಠಡಿ ಸಂಖ್ಯೆ : 226, ಎರಡನೇ ಮಹಡಿ,**
   **ವಿಕಾಸ ಸೌಧ, ಬೆಂಗಳೂರು–560001**

3. ಅರ್ಜಿ ಸಲ್ಲಿಸುವ ಅಭ್ಯರ್ಥಿಗಳು ಲಕೋಟೆಯ ಮೇಲೆ
   "ಬ್ಯಾಕ್ ಲಾಗ್ ತಾಂತ್ರಿಕ ಸಹಾಯಕ ಹುದ್ದೆಗೆ ನೇಮಕಾತಿ ಅರ್ಜಿ"
   ಎಂದು ನಮೂದಿಸತಕ್ಕದ್ದು.

4. ವಯೋಮಿತಿ : ಕನಿಷ್ಠ 18 ವರ್ಷಗಳು ಗರಿಷ್ಠ 40 ವರ್ಷಗಳು.

5. ಅರ್ಜಿಯ ಜೊತೆಗೆ ಈ ಕೆಳಕಂಡ ದೃಢೀಕೃತ ಪತ್ರಗಳನ್ನು ಸಲ್ಲಿಸತಕ್ಕದ್ದು :–

   (ಅ) ಶಿಕ್ಷಣ ವಿದ್ಯಾರ್ಹತೆಯ ಪ್ರಮಾಣ ಪತ್ರಗಳು
   (ಆ) ಜನ್ಮ ದಿನಾಂಕದ ಬಗ್ಗೆ ಪ್ರಮಾಣ ಪತ್ರ
   (ಇ) ಅಭ್ಯರ್ಥಿಯು ಕಲಿತ ಶಾಲೆಯ/ಕಾಲೇಜಿನ ಮುಖ್ಯಸ್ಥರು ಕೊಟ್ಟಿರುವ ಪ್ರಮಾಣ ಪತ್ರ
   (ಈ) ಪರಿಶಿಷ್ಟ ಪಂಗಡದ ಪ್ರಮಾಣ ಪತ್ರ
   (ಉ) ಅರ್ಜಿಯಲ್ಲಿ ಅಭ್ಯರ್ಥಿಯು ತನ್ನ ಇತ್ತೀಚಿನ ಭಾವಚಿತ್ರ ಲಗತ್ತಿಸತಕ್ಕದ್ದು.

ಆಯ್ಕೆಯಾದ ಅಭ್ಯರ್ಥಿಯು ಕರ್ನಾಟಕದ ಯಾವುದೇ ಭಾಗದಲ್ಲಿ ಹಾಗೂ ವಹಿಸಿದ ಕಛೇರಿ ಕೆಲಸ ಮಾಡಲು ಸಿದ್ಧರಿರತಕ್ಕದ್ದು.

................

ನಿರ್ದೇಶಕರು ಹಾಗೂ ನೇಮಕಾತಿ ಪ್ರಾಧಿಕಾರ
ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ.

ಅರ್ಜಿ ನಮೂನೆ

**ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆಯಲ್ಲಿ**

**ತಾಂತ್ರಿಕ ಸಹಾಯಕ (ಗ್ರೂಪ್–ಸಿ) ಬ್ಯಾಕ್‌ಲಾಗ್ ಹುದ್ದೆಗೆ ನೇರ ನೇಮಕಾತಿಗಾಗಿ ಅರ್ಜಿ**

ಪಾಸ್‌ಪೋರ್ಟ್ ಸೈಜ್ ಭಾವಚಿತ್ರ

| | | |
|---|---|---|
| 1 | ಅಭ್ಯರ್ಥಿಯ ಹೆಸರು ಮತ್ತು ವಿಳಾಸ (ದಪ್ಪ ಅಕ್ಷರದಲ್ಲಿ) | |
| 2 | ತಂದೆ/ಗಂಡ/ಪೋಷಕರ ಹೆಸರು | |
| 3 | ಜನ್ಮ ದಿನಾಂಕ (ಅಂಕಿ ಮತ್ತು ಅಕ್ಷರಗಳಲ್ಲಿ) | |
| 4 | ಲಿಂಗ (ಗಂಡು/ಹೆಣ್ಣು) | |
| 5 | ವಿದ್ಯಾರ್ಹತೆ : (ಶಾಲೆ/ಕಾಲೇಜಿನ ವಿಳಾಸದೊಂದಿಗೆ) | |
| 6 | ಮತ | |
| 7 | ಜಾತಿ/ಉಪ ಜಾತಿ | |
| 8 | ವೈವಾಹಿಕ ಸ್ಥಿತಿ (ವಿವಾಹಿತ/ಅವಿವಾಹಿತ) | |
| 9 | ಸರ್ಕಾರಿ/ಅರೆಸರ್ಕಾರಿ ನೌಕರಿಯಲ್ಲಿದ್ದರೆ ಅರ್ಜಿಯನ್ನು ಇಲಾಖಾ ಮುಖ್ಯಸ್ಥರ ಮೂಲಕ ಸಲ್ಲಿಸತಕ್ಕದ್ದು. ಇಲ್ಲವಾದಲ್ಲಿ ಅವರಿಂದ ನಿರಪೇಕ್ಷಣಾ ಪತ್ರ ಪಡೆದು ಸಲ್ಲಿಸತಕ್ಕದ್ದು. | |
| 10 | ಲಗತ್ತಿಸಿರುವ ದಾಖಲೆಗಳ ಪಟ್ಟಿ | |

**ದೃಢೀಕರಣ**

ಈ ಮೇಲೆ ಒದಗಿಸಿದ ಎಲ್ಲಾ ಮಾಹಿತಿ ನಿಜವಾದ ಮತ್ತು ಪೂರ್ಣ ಪ್ರಮಾಣದ ಮಾಹಿತಿ ಎಂದು ಪ್ರಮಾಣೀಕರಿಸುತ್ತೇನೆ. ಇವು ಸುಳ್ಳೆಂದು ಕಂಡು ಬಂದಲ್ಲಿ ನನ್ನ ಅರ್ಜಿಯನ್ನು ತಿರಸ್ಕರಿಸಬಹುದಾಗಿದೆ.

ಸ್ಥಳ : ಅಭ್ಯರ್ಥಿಯ ಸಹಿ

ದಿನಾಂಕ :

**P.R. 82**

## FORM-1

**(See rule 9)**

**Department of Subordinate Judiciary**

**Office of the City Civil Court, Court Complex, Bangalore-9**

**NOTIFICATION**

**No. ADM-I (A)/436/2013, dated May 6, 2013**

**Sri H.N. SUBBARAYAPPA,** Working as First Division Assistant in the City Civil Court, Bangalore is permitted to change his name to **"H.N. SUBRAMANYA"**.

**SHIVASHANKAR AMARANNAVAR**
I/c Principal City Civil & Sessions Judge,
Bangalore

**P.D. 79**
**SC - 5**

**FORM-1**

**(See rule 9)**

**Department of Subordinate Judiciary**

**Office of the City Civil Court, Court Complex, Bangalore-9**

**NOTIFICATION**

**No. ADM-I (A)/437//2013, dated May 6, 2013**

**Sri C. KIRAN KUMAR,** Working as First Division Assistant in the City Civil Court, Bangalore is permitted to change his name to **"KIRAN NARASIMHA C".**

**SHIVASHANKAR AMARANNAVAR**

I/c Principal City Civil & Sessions Judge,

Bangalore

**P.D. 80**

**SC - 5**

**FORM-1V**

**(See Rule 12)**

**NOTICE**

It is hereby notified that the undersigned has changed his/her name from Sri **PEERAPPA PARASAPPA MADAR** to **PEERAPPA PARASAPPA SARVADNYA.**

**PEERAPPA PARASAPPA MADAR**

**P.D. 81**

**SC - 5**

**ಕರ್ನಾಟಕ ಲೋಕಸೇವಾ ಆಯೋಗ**

**ಲೋಕಸೇವಾ ಆಯೋಗದ ಕಛೇರಿ, "ಉದ್ಯೋಗ ಸೌಧ", ಬೆಂಗಳೂರು**

**ತಿದ್ದುಪಡಿ ಅಧಿಸೂಚನೆ**

**ಸಂಖ್ಯೆ: ಇಪ(2) 134/2013-14/ಪಿಎಸ್‌ಸಿ, ಬೆಂಗಳೂರು, ದಿನಾಂಕ: 25ನೇ ಜೂನ್ 2013.**

2012ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಗಳ ಫಲಿತಾಂಶವನ್ನು ದಿನಾಂಕ 17-04-2013ರ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಿಸಲಾಗಿದ್ದು, ಸದರಿ ಅಧಿವೇಶನದಲ್ಲಿ ಅಭ್ಯರ್ಥಿಗಳು ಗಳಿಸಿರುವ ಅಂಕಗಳು ಹಾಗೂ ಹಿಂದಿನ ಅಧಿವೇಶನಗಳಲ್ಲಿ ಗಳಿಸಿರುವ ವಿನಾಯಿತಿಯನ್ನು ಪರಿಗಣಿಸಿ ಫಲಿತಾಂಶವನ್ನು ಪ್ರಕಟಿಸುವಂತೆ ಅಭ್ಯರ್ಥಿಗಳಿಂದ ಬಂದ ಮನವಿಗಳನ್ನು ಪುರಸ್ಕರಿಸಿ ಈ ಕೆಳಕಂಡ ತಿದ್ದುಪಡಿಯನ್ನು ಸಂಬಂಧಿತರ ಮಾಹಿತಿಗಾಗಿ ಪ್ರಕಟಿಸಲಾಗಿದೆ.

**ಅಪೆಂಡಿಕ್ಸ್** "ಎ"

ಬೆಳಗಾವಿ ಕೇಂದ್ರ

**ಅಕೌಂಟ್ಸ್ ಹೈಯರ್**

ಸಾಮಾನ್ಯ ದರ್ಜೆಯಲ್ಲಿ ಉತ್ತೀರ್ಣರಾದವರಡಿ ನೋಂದಣಿ ಸಂಖ್ಯೆ: **50333 ನ್ನು** ಸೇರಿಸಿ ಓದಿಕೊಳ್ಳುವುದು.

**ಅಪೆಂಡಿಕ್ಸ್ "ಎ"**

ಹಾವೇರಿ ಕೇಂದ್ರ

**ಅಕೌಂಟ್ಸ್ ಹೈಯರ್**

ಪ್ರಥಮ ದರ್ಜೆಯಲ್ಲಿ ಉತ್ತೀರ್ಣರಾದವರಡಿ ನೋಂದಣಿ ಸಂಖ್ಯೆ: **69691 ನ್ನು** ಸೇರಿಸಿ ಓದಿಕೊಳ್ಳುವುದು.

**ಅಪೆಂಡಿಕ್ಸ್ "ಎ"**

ಶಿವಮೊಗ್ಗ ಕೇಂದ್ರ

**ರೆವಿನ್ಯೂ ಹೈಯರ್ ಭಾಗ–1**

ಪ್ರಥಮ ದರ್ಜೆಯಲ್ಲಿ ಉತ್ತೀರ್ಣರಾದವರಡಿ ನೋಂದಣಿ ಸಂಖ್ಯೆ: **81458 ನ್ನು** ಸೇರಿಸಿ ಓದಿಕೊಳ್ಳುವುದು.

**ಕೆ.ಆರ್. ಸುಂದರ್, ಭಾ.ಆ.ಸೇ,**
ಕಾರ್ಯದರ್ಶಿ ಹಾಗೂ ನಿಯಂತ್ರಕರು,
ಕರ್ನಾಟಕ ಲೋಕಾಸೇವಾ ಆಯೋಗ.
ಬೆಂಗಳೂರು.

**P.R.- 80**
**S.C.- 25**